# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1989+1992

ಮಾನ್ಯ ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು)

ವಿಷಯ : ಬೀದರ್ ಜಿಲ್ಲೆಯ ಪ್ರವಾಸೋದ್ಯಮ ಅಭಿವೃದ್ಧಿಗೊಳಿಸುವ ಬಗ್ಗೆ.

ಉತ್ತರಿಸುವ ದಿನಾಂಕ : 27.03.2020

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯ ವಿಶ್ವ ಪಾರಂಪಾರಿಕ ತಾಣ ಸೀರಿಯಲ್ ನಾಮಿನೇಷನ್‌ನಲ್ಲಿ ಆಯ್ಕೆಯಾಗಿದ್ದು, ಅದಕ್ಕೆ ಬೇಕಾದಂತಹ ವರದಿಯನ್ನು ರಾಜ್ಯ ಸರ್ಕಾರ ಕೇಂದ್ರ ಸರ್ಕಾರಕ್ಕೆ ಕಳುಹಿಸಿದೆಯೇ; ಕಳುಹಿಸದಿದ್ದಲ್ಲಿ ಇದಕ್ಕೆ ಹೊಣೆಗಾರರು ಯಾರು; | ಬೀದರ್ ಸೇರಿದಂತೆ ಕಲಬುರಗಿ, ಬಿಜಾಪುರದಲ್ಲಿರುವ ಸ್ಮಾರಕ ಮತ್ತು ಕೋಟೆಗಳನ್ನು ಒಳಗೊಂಡಂತೆ "Monuments and Forts of Deccan Sultanate" (Deccan Sultanate Architecture including Kalaburgi, Bidar and Bijapur) ಎಂಬ ಶೀರ್ಷಿಕೆಯಡಿ ವಿಶ್ವ ಪರಂಪರೆ ಅಂತಿಮ ಪಟ್ಟಿಗೆ ಸೇರ್ಪಡೆಗೊಳಿಸಲು Site Management Plan and Dossier ನ್ನು ಸಿದ್ಧಪಡಿಸಿ ದಿನಾಂಕ: 21.01.2019ರ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇವರ ಪತ್ರದೊಂದಿಗೆ ಕೇಂದ್ರ ಸಂಸ್ಕೃತಿ ಮಂತ್ರಾಲಯದ ವ್ಯಾಪ್ತಿಯಲ್ಲಿ ಬರುವ ಇಲಾಖೆಯ ಮಹಾ ನಿರ್ದೇಶಕರು, ಭಾರತೀಯ ಪುರಾತತ್ವ ಸರ್ವೇಕ್ಷಣೆ ಇಲಾಖೆ, ನವದೆಹಲಿ, ಇವರ ಮೂಲಕ ವಿಶ್ವ ಪರಂಪರ ಪಟ್ಟಿ ಆಯ್ಕೆ ಸಮಿತಿಯ ಪರಿಶೀಲನೆಗೆ ಸಲ್ಲಿಸಲಾಗಿದ್ದು, ಇದು ವಿಶ್ವಸಂಸ್ಥೆಯ ಯುನೆಸ್ಕೋ (UNESCO) ಅಂಗ ಸಂಸ್ಥೆಯ ಪರಿಶೀಲನೆಯಲ್ಲಿರುತ್ತದೆ. |
| ಆ) | ಕೇಂದ್ರ ಸರ್ಕಾರದ ಪ್ರಸಾದ್ ಯೋಜನೆಯಡಿಯಲ್ಲಿ ಬೀದರ್ ಜಿಲ್ಲೆ ಪ್ರಸ್ತಾವನೆ ಸಲ್ಲಿಸಲಾಗಿತ್ತು; ಅದು ಯಾವ ಹಂತದಲ್ಲಿದೆ; ಅದನ್ನು ಜಾರಿಗೊಳಿಸುವ ಪ್ರಯತ್ನ ಸರ್ಕಾರದ ಮುಂದಿದೆಯೇ? | ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯದ ಪ್ರಸಾದ್ ಯೋಜನೆಯಡಿಯಲ್ಲಿ ಬೀದರ್ ಜಿಲ್ಲೆಗೆ ಸಂಬಂಧಿಸಿದಂತೆ ಪ್ರವಾಸೋದ್ಯಮ ಇಲಾಖೆಯಿಂದ ಯಾವುದೇ ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. |

ಕಡತ ಸಂಖ್ಯೆ: ಟಿಓಆರ್ 132 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.